## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1575** |
| ಉತ್ತರಿಸಬೇಕಾದ ದಿನಾಂಕ | : | **18.03.2021.** |
| ಸದಸ್ಯರ ಹೆಸರು | : | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | : | ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು. |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಕ್ರೀಡಾ ಕಲಿಗಳ ತವರು ಹಾಗೂ ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದ ಹಾಕಿ ಕ್ರೀಡಾಪಟುಗಳನ್ನು ದೇಶಕ್ಕೆ ಕೊಡುಗೆ ನೀಡಿದ ಕೊಡಗಿನಲ್ಲಿ ಪ್ರತಿ ವರ್ಷ ನಡೆಯುವ ಕೊಡವ ಕೌಟುಂಬಿಕ ಹಾಕಿ ಹಬ್ಬಕ್ಕೆ ಪ್ರತಿ ವರ್ಷ ಕನಿಷ್ಟ 5 ಕೋಟಿ ರೂಪಾಯಿ ಅನುದಾನವನ್ನು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಒದಗಿಸಬೇಕೆಂಬ ಬೇಡಿಕೆ ಬಹು ಕಾಲದಿಂದ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದ ಹಾಕಿ ಕ್ರೀಡಾಪಟುಗಳನ್ನು ದೇಶಕ್ಕೆ ಕೊಡುಗೆ ನೀಡುವಲ್ಲಿ ಮಹತ್ತರ ಪಾತ್ರ ವಹಿಸುತ್ತಾ ಬಂದಿರುವ ಕೊಡವ ಕೌಟುಂಬಿಕ ಹಾಕಿ ಹಬ್ಬಕ್ಕೆ 2021-22ನೇ ಸಾಲಿನಿಂದಲಾದರೂ ಪ್ರತಿ ವರ್ಷ ಕನಿಷ್ಟ 5 ಕೋಟಿ ರೂಪಾಯಿ ಅನುದಾನವನ್ನು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಒದಗಿಸಲು ಕ್ರಮ ವಹಿಸುವುದೇ? | ಕೊಡವ ಕೌಟುಂಬಿಕ ಹಾಕಿ ಹಬ್ಬಕ್ಕೆ ಕರ್ನಾಟಕ ಕ್ರೀಡಾ ಪ್ರಾಧಿಕಾರದ ಮೂಲಕ ಪ್ರತಿ ವರ್ಷ ಗಣನೀಯ ಮೊತ್ತದ ಅನುದಾನವನ್ನು ಒದಗಿಸಲಾಗುತ್ತಿದೆ. ಮಚ್ಚಮಾಡ ಕಪ್-2011 ಕ್ಕೆ ರೂ. 25.00 ಲಕ್ಷ; ಐಚೆಟ್ಟಿರ ಹಾಕಿ ಫೆಸ್ಟ್-2012 ಕ್ಕೆ ರೂ. 30.00 ಲಕ್ಷ; ಮಾದಂಡ ಹಾಕಿ ಫೆಸ್ಟ್ -2013 ಕ್ಕೆ 25.00 ಲಕ್ಷ; ತಾತಂಡ ಹಾಕಿ ಫೆಸ್ಟ್ -2014 ಕ್ಕೆ ರೂ. 30.00 ಲಕ್ಷ; ಕುಪ್ಪಂಡ ಕಪ್ -2015ಕ್ಕೆ ರೂ.35.00 ಲಕ್ಷ; ಶಾಂತೆಯಂಡ ಹಾಕಿ ಹಬ್ಬ-2016 ಕ್ಕೆ ರೂ.30.00 ಲಕ್ಷ ಹಾಗೂ ಬಿದ್ದಾತಾಂಡ ಹಾಕಿ ಹಬ್ಬ-2017 ಕ್ಕೆ ರೂ. 20.00 ಲಕ್ಷ ಅನುದಾನ ಮಂಜೂರು ಮಾಡಿ, ಬಿಡುಗಡೆ ಮಾಡಲಾಗಿದೆ. ಅದೇ ರೀತಿ, ಕುಲ್ಲೇಟಿರ ಹಾಕಿ ಹಬ್ಬ-2018 ಕ್ಕೆ ರೂ. 25.00 ಲಕ್ಷ ಮಂಜೂರು ಮಾಡಲಾಗಿದ್ದು, ನಿಯಮಾನುಸಾರ ಅನುದಾನ ಬಿಡುಗಡೆಗೆ ಕ್ರಮವಹಿಸಲಾಗುತ್ತಿದೆ.<br><br>ಕೊಡವ ಕೌಟುಂಬಿಕ ಹಾಕಿ ಹಬ್ಬಕ್ಕೆ ಅನುದಾನದ ಲಭ್ಯತೆ ಆಧರಿಸಿ, ಪ್ರತಿ ವರ್ಷ ಗಣನೀಯ ಮೊತ್ತದ ಅನುದಾನ ಬಿಡುಗಡೆ ಮಾಡಲಾಗುತ್ತಿದ್ದು, ರೂ. 5.00 ಕೋಟಿ ಅನುದಾನ ಒದಗಿಸುವ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಿದ್ದು, ಪರಿಶೀಲನೆಯಲ್ಲಿದೆ. |

**ವೈಎಸ್ ಡಿ-ಇಬಿಬಿ/63/2021.**

**(ಡಾ|| ನಾರಾಯಣ ಗೌಡ)**
ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಸಚಿವರು.